# ನನಗೆ ನನ್ನ ಸ್ವಾತಂತ್ರ್ಯ ಬೇಕು: ನನಗೊಂದು ಮಾರ್ಗನಕ್ಷೆ ಕೊಡಬೇಡಿ

ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟಿನಿಂದ (ಎನ್‌ಸಿಎಫ್) ಪ್ರಯೋಜನವದರೂ ಏನು? ಎಂದು ಆಗಾಗ್ಗೆ ಪ್ರಶ್ನೆಯ ರೂಪದಲ್ಲಿ ಮರೆಮಾಚಿ ಸವಾಲನ್ನು ಕೇಳುತ್ತಾರೆ. ಸವಾಲೆಸೆಯುವವರು ತಮ್ಮನ್ನು ತಾವು ಎಷ್ಟು ವಿವೇಚನಾಯುಕ್ತರೂ, ಕಾಳಜಿಯುಳ್ಳವರೂ ಅಥವಾ ಸುಧಾರಣಾವಾದಿ ಎಂದು ತೋರಿಸಿಕೊಳ್ಳಲು ಇಚ್ಛಿಸುತ್ತಾರೆಂಬುದರ ಮೇಲೆ ಸಂವಾದದಲ್ಲಿ ಏಳುವ ಮುಂದಿನ ಸವಾಲುಗಳು ಏನಿರಲಿವೆ ಎಂಬುದು ನಿರ್ಧಾರವಾಗುತ್ತದೆ. ಅವುಗಳಲ್ಲಿ ಕೆಲವು ಕೆಳಗಿನಂತಿರಲಿವೆ: ಸಾಂಸ್ಕೃತಿಕವಾಗಿ ಮತ್ತು ನೈಸರ್ಗಿಕವಾಗಿ ಬಲು ವೈವಿಧ್ಯಮಯವಾದ ಮತ್ತು ವಿಸ್ತಾರವಾಗಿದ ಪರಿಸರವನ್ನು ಹೊಂದಿರುವ ನಮ್ಮ ದೇಶಕ್ಕೆ ಯಾವುದೋ ಒಂದೇ ಬಗೆಯ ಶಿಕ್ಷಣ ಯೋಜನೆಯು ಎಲ್ಲರಿಗೂ ಹೊಂದುತ್ತದೆಯೆಂದು ಸರ್ವಥಾ ಆಶಿಸಲಾಗದು. ''ಒಂದೇ ಗಾತ್ರವು ಎಲ್ಲಕ್ಕೂ ಹೊಂದಿಕೆಯಾಗುವುದಿಲ್ಲ'' ಎಂಬುದನ್ನು ಒಂದು ಮೂಲ ತತ್ವವೇನೋ ಎಂಬಂತೆ ಉದ್ಧರಿಸಲಾಗುತ್ತದೆ. ಇಲ್ಲವೇ: ಪಠ್ಯಕ್ರಮವು ವಿದ್ಯಾರ್ಥಿ ಹಾಗೂ ಶಿಕ್ಷಕ ಇಬ್ಬರನ್ನೂ ಕಟ್ಟಿಹಾಕುತ್ತದೆ, ಅವರ ಒಳಿತನ್ನು ಕಡೆಗಣಿಸಲಾಗುತ್ತದೆ, ಅವರ ರಚನಾತ್ಮಕತೆಯನ್ನು ಕುಂಠಿತಗೋಳಿಸಲಾಗುತ್ತದೆ ಮತ್ತು ಅವರ ಕುತೂಹಲವನ್ನು ಕೊಲ್ಲಲಾಗುತ್ತದೆ, ಮಗುವನ್ನು ಸ್ವತಂತ್ರವಾಗಿ ಬಿಡಬೇಕು. ಅಥವಾ ಎನ್‌ಸಿಎಫ್ ಬಹಳವೇ ಆದರ್ಶವಾದಿಯಾಗಿದ್ದು, ವಾಸ್ತವದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ನಿರುಪಯೋಗಿಯೇ, ಎಲ್ಲರೂ ಅದನ್ನು ನಿರ್ಲಕ್ಷಿಸುತ್ತಾರೆ.

ಇವರ ಮಾತುಗಳು ''ನನಗೆ ನನ್ನ ಸ್ವಾತಂತ್ರ್ಯ ಬೇಕು: ನನಗೊಂದು ಮಾರ್ಗನಕ್ಷೆ ಕೊಡಬೇಡಿ'' ಎಂಬ ನಾವಿಕನ ಮಾತುಗಳಂತೆ ಕೇಳಿಬರುತ್ತದೆ. ನಾವಿಕನು ನಕ್ಷೆಯಿಲ್ಲದಿದ್ದರೆ, ತನ್ನ ಸುದೀರ್ಘ ಸಮುದ್ರಯಾನದಲ್ಲಿ ಹೇಗೆ ದಿಕ್ಕುತಪ್ಪಿಸಿಕೊಳ್ಳುತ್ತಾನೆಯೋ ಹಾಗೆ ಶಿಕ್ಷಣವೆಂಬ ಉಬ್ಬರವಿಳಿತದ ಸಮುದ್ರದಲ್ಲಿ ಈ ಹೊಸತನ್ನು ತರುವ ಜನರೂ ದಿಕ್ಕುತಪ್ಪುತ್ತಾರೆ. ಈ ಸವಾಲುಗಳಿಗೆ ಸರಿಯಾಗಿ ಪ್ರತಿಕ್ರಿಯಿಸಲು ಎನ್‌ಸಿಎಫ್ ಉಪಯೋಗ ಮತ್ತು ದುರುಪಯೋಗಗಳನ್ನು ನಾವು ಗಮನಿಸೋಣ.

## ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆ

1976ಕ್ಕಿಂತ ಮೊದಲು ಶಿಕ್ಷಣವು ರಾಜ್ಯಪಟ್ಟಿಯಲ್ಲಿದ್ದಿತು. ಸಂವಿಧಾನದ 42ನೇ ತಿದ್ದುಪಡಿಯ ಮೂಲಕ ಇದನ್ನು ಸಮವರ್ತಿ ಪಟ್ಟಿಗೆ ತರಲಾಯಿತು. ಇದಕ್ಕಿಂತ ಮೊದಲು ಒಂದು 'ರಾಷ್ಟ್ರೀಯ' ಪಠ್ಯಕ್ರಮ ಚೌಕಟ್ಟು ಇರಲು ತಾಂತ್ರಿಕವಾಗಿ ಸಾಧ್ಯವಿರಲಿಲ್ಲ. ಎನ್‌ಸಿಎಫ್ 2005ರಲ್ಲಿ ''ಮೊಟ್ಟಮೊದಲ ಬಾರಿಗೆ 1986ರಲ್ಲಿ ಒಟ್ಟು ದೇಶವು ಒಂದು ಸಮಾನ ಶಿಕ್ಷಣ ನೀತಿಯನ್ನು ಹೊಂದಲು ಸಾಧ್ಯವಾಯಿತು'' (ಎನ್‌ಸಿಎಫ್ 2005, ಪು4) ಎಂದು ಹೇಳಲಾಗಿದೆ. ಸಂವಿಧಾನವು ಅಂಗೀಕರಿಸಿದ ರಾಷ್ಟ್ರೀಯ ಶಿಕ್ಷಣ ನೀತಿಯೇನೋ 1968ರಲ್ಲಿ ಹೊಂದಿದ್ದೆವಾದರೂ, ಆ ಸಮಯದಲ್ಲಿ ಶಿಕ್ಷಣವು ರಾಜ್ಯ ಪಟ್ಟಿಯಲ್ಲಿದ್ದಿತು ಆದ್ದರಿಂದ ''ರಾಜ್ಯಗಳಿಗೆ ಶಾಲಾಶಿಕ್ಷಣದ ಬಗೆಗಿನ ಪಠ್ಯಕ್ರಮವೂ ಸೇರಿದಂತೆ ಎಲ್ಲ ನಿರ್ಧಾರಗಳನ್ನು ತೆಗೆದುಕೊಳ್ಳುವ ಅಧಿಕಾರವನ್ನು ನೀಡಲಾಗಿತ್ತು'' (ಎನ್‌ಸಿಎಫ್ 2005, ಪು3) ಮತ್ತು ''ಕೇಂದ್ರವು ರಾಜ್ಯಗಳಿಗೆ ನೀತಿಯ ವಿಷಯದಲ್ಲಿ ಕೇವಲ ಮಾರ್ಗದರ್ಶನ ನೀಡಬಹುದಿತ್ತು'' (ಎನ್‌ಸಿಎಫ್ 2005, ಪು3).

ಆದಾಗ್ಯೂ, ರಾಷ್ಟ್ರೀಯ ಶಿಕ್ಷಣದ ಬಗೆಗಿನ ಚಿಂತನೆಯು ಅದಕ್ಕೂ ಬಹಳ ಮುಂಚಿನದು. ಕಳೆದ ಶತಮಾನದ ಮೊದಲೆರಡು ದಶಕಗಳಲ್ಲಿ ದೇಶಾದ್ಯಂತ ಇದರ ಬಗ್ಗೆ ನಡೆದ ಬಹಳಷ್ಟು ಚರ್ಚೆಗಳಲ್ಲಿ ಭಾರತೀಯರ ಸ್ವಪ್ರಜ್ಞೆಯ ಮೇಲೆ ವಸಾಹತುಶಾಹಿ ಶಿಕ್ಷಣದ ಕೆಟ್ಟ ಪರಿಣಾಮಗಳನ್ನು ಗಮನಿಸಿದ ಬಹಳಷ್ಟು ಮಂದಿ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಅದರ ಜಾಗದಲ್ಲಿ ಸ್ಥಾಪಿಸಬೇಕೆಂದು ಆಶಿಸಿದರು. ಅರವಿಂದರು ಶಿಕ್ಷಣವು ಮನುಷ್ಯನ ಮನಸ್ಸಿನ ಬಗೆಗಿನ ಭಾರತೀಯ ಗ್ರಹಿಕೆಯು ಬಹುಮಟ್ಟಿಗೆ ಸಾಂಖ್ಯ ಮತ್ತು ಯೋಗದ ಆಧಾರದಲ್ಲಿ ಇರಬೇಕೆಂದು ಬಯಸಿದ್ದರು[1]. ವಸಾಹತುಶಾಹಿ ಶಿಕ್ಷಣವನ್ನು ತೀವ್ರವಾಗಿ ಟೀಕಿಸಿದ್ದ ಲಾಲಾ ಹರ್ ದಯಾಳ್ ಅವರು ಭಾರತೀಯ ಸಂಸ್ಕೃತಿ ಮತ್ತು ರಾಷ್ಟ್ರಪ್ರೇಮದ ಆಧಾರದ ರಾಷ್ಟ್ರೀಯ ವ್ಯವಸ್ಥೆಯನ್ನು ಪ್ರತಿಪಾದಿಸಿದರು[2]. ಟ್ಯಾಗೋರರು ದೇಶಕ್ಕೆ ಸರಿಹೊಂದುವ ಒಂದು ವಿಶ್ವವಿದ್ಯಾಲಯವು ದೇಶದ ಸಾಂಸ್ಕೃತಿಕ ಸಂಪನ್ಮೂಲಗಳಿಂದಲೇ ಹುಟ್ಟಲು ಸಾಧ್ಯ ಎಂದು ವಾದಿಸಿದರು[3]; ವಿಶ್ವವಿದ್ಯಾಲಯದೆಡೆಗಿನ ಈ ವಾದವು ಅವರ ಪ್ರಕಾರ ಶಾಲೆಗೂ ದಿಟವೇ ಆಗಿತ್ತು.

ಲಾಲಾ ಲಜಪತ್ ರಾಯ್[4] ಅವರು ಶಿಕ್ಷಣವನ್ನು ರಾಷ್ಟ್ರೀಕರಣಗೊಳಿಸುವ ಹಲವು ಪ್ರಯತ್ನಗಳನ್ನು ವ್ಯವಸ್ಥಿತವಾಗಿ ವಿಶ್ಲೇಸಿದರು ಮತ್ತು ಇವನ್ನು ಅವರು ಪಂಥೀಯವೆಂದು ತಳ್ಳಿಹಾಕಿದರು. ನೇರವಾಗಿ ಹೇಳಿದರು ''ದಯಾನಂದ್ ಆಂಗ್ಲೋ ವೇದಿಕ್ ಕಾಲೇಹ್, ...... ಅಲಿಘರ್‌ನ ದಿ ಮೊಹಮಡನ್ ಕಾಲೇಜ್, ಲಾಹೋರ್‌ನ ಆರ್ಯ ಕಾಲೇಜ್, ಬನಾರಸ್‌ನ ದಿ ಹಿಂದೂ ಕಾಲೇಜ್ ಎಲ್ಲವೂ ತಮ್ಮ ಸ್ಥಾಪಕರ ಪಂಥೀಯ

---

[1] ಆರಬಿಂದೋ ಘೋಷ್, ಎ ಸಿಸ್ಟೆಮ್ ಆಫ್ ನ್ಯಾಷನಲ್ ಎಜುಕೇಷನ್, ಟ್ಯಾಗೋರ್ ಅಂಡ್ ಕೋ, ಮದ್ರಾಸ್, 1921

[2] ಹರ್ ದಯಾಲ್, ಅವರ್ ಎಜುಕೇಷನಲ್ ಪ್ರಾಬ್ಲಮ್, ಟ್ಯಾಗೋರ್ ಅಂಡ್ ಕೋ, ಮದ್ರಾಸ್, 1922

[3] ರವೀಂದ್ರನಾಥ್ ಟ್ಯಾಗೋರ್, ದಿ ಸೆಂಟರ್ ಆಫ್ ಇಂಡಿಯನ್ ಕಲ್ಚರ್, ಮದ್ರಾಸಿನಲ್ಲಿ ನೀಡಿದ ಒಂದು ಉಪನ್ಯಾಸ, 1919

[4] ಲಜಪತ್ ರಾಯ್, ದಿ ಪ್ರಾಬ್ಲಮ್ ಆಫ್ ನ್ಯಾಷನಲ್ ಎಜುಕೇಷನ್ ಇನ್ ಇಂಡಿಯಾ, ಜಾರ್ಜ್ ಆಲೆನ ಅಂಡ್ ಅನ್ವಿನ್, ಲಂಡನ್ 1920

ಮತ್ತು ಮಿತಿಗೊಳಪಟ್ಟಿದ್ದ 'ರಾಷ್ಟ್ರೀಯ' ತತ್ವಗಳನ್ನೇ ಮೈಗೂಡಿಸಿಕೊಂಡವು,'' ಇವು ಯಾವುವೂ ರಾಷ್ಟ್ರೀಯ ಶಿಕ್ಷಣಕ್ಕೆ ಮಾದರಿಯಾಗಲಾರವು ಎಂದು ವಾದಿಸಿದರು. ನನ್ನ ವಿವೇಚನೆಯಲ್ಲಿ ನಿಜಕ್ಕೂ ರಾಷ್ಟ್ರೀಯ ಎನ್ನಬಹುದಾದ ಈ ಮಾದರಿಯ ಒಂದೇ ಪ್ರಯತ್ನ ಎಂದರೆ ಬಂಗಾಲದ ರಾಷ್ಟ್ರೀಯ ಶಿಕ್ಷಣ ಸಮಿತಿಯದು. ...... ರಾಷ್ಟ್ರೀಯ ಸಮಿತಿಯ ಯೋಜನೆಯು ಭಾರತೀಯ ಮೇಲ್ವರ್ಗದ ಆಂದೋಲನಗಳ **ಪಂಥೀಯ ಛಾಯೆಯಿಂದ** ಮುಕ್ತವಾಗಿದೆ. (ಪು24, ಒತ್ತನ್ನು ಸೇರಿಸಲಾಗಿದೆ). ಪ್ರಾಯಶಃ ಇದು ರಾಷ್ಟ್ರೀಯ ಶಿಕ್ಷಣಕ್ಕೆ ಬಹಳ ಮುಖ್ಯವಾದ ತತ್ವವನ್ನು ರಚಿಸಿ ಪ್ರತಿಪಾದಿಸುತ್ತದೆ: ಅದು ಪಂಥೀಯವಾಗಿರಬಾರದು.

ರಾಷ್ಟ್ರೀಯ ಶಿಕ್ಷಣದ ಚಿಂತನೆಯೊಳಗಣ ಈ ಪುಟ್ಟ ಪಯಣವು ಒಂದಕ್ಕಿಂತಾ ಹೆಚ್ಚು ವಿಧದಲ್ಲಿ ಮಿತಿಯುಳ್ಳದ್ದಾಗಿದ್ದು, ರಾಷ್ಟ್ರೀಯ ಶಿಕ್ಷಣದ ಪರಿಕಲ್ಪನೆಯು ಮತ್ತು ಅದರಿಂದ ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟು ರೂಪುಗೊಳ್ಳುವಲ್ಲಿ ಪಾತ್ರಹೊಂದಿದ್ದ ತತ್ವಗಳನ್ನು ಹಿಡಿದಿಡುವ ಗುರಿಯನ್ನಷ್ಟೇ ಹೊಂದಿದೆ. ಬಹಳಷ್ಟು ಭಾರತೀಯರ ಮನಗಳಲ್ಲಿರುವ ಅಂತಹಾ ಒಂದು ತತ್ವವೆಂದರೆ ಎಲ್ಲರಿಗೂ ಪಂಥೀಯವಲ್ಲದ ಶಿಕ್ಷಣ. ರಾಷ್ಟ್ರೀಯ ಪ್ರಜ್ಞೆ ಮತ್ತು ರಾಷ್ಟ್ರೀಯ ಚೈತನ್ಯವನ್ನು ಬೆಳೆಸಬಲ್ಲ ಶಿಕ್ಷಣವೆಂಬುದು ಮತ್ತೊಂದು. ಮೂರನೆಯ ತತ್ವವೆಂದರೆ ರಾಷ್ಟ್ರದ ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ ಬದುಕಿಗೆ ಕೊಡುಗೆ ನೀಡಬಲ್ಲಂತಹುದು ಮತ್ತು ಕೊನೆಯದಾದ ಆದರೆ ಕಡಿಮೆಯಲ್ಲದ್ದು ಸ್ವತಂತ್ರ ವ್ಯಕ್ತಿಯ ಬೆಳವಣಿಗೆ.

ಎನ್‌ಸಿಎಫ್ ರಚನೆಗೊಂಡ ವಿಷಯಕ್ಕೆ ಮರಳಿದರೆ, ನಾವು ಗಮನಿಸಬೇಕಾದ ಅಂಶವೆಂದರೆ ಎನ್‌ಪಿಇ 1968ರಿಂದಲೂ (ಪ್ರಾಯಶಃ 1950ರ ರಾಧಾಕೃಷ್ಣನ್ ಸಮಿತಿಯ ಸಮಯದಿಂದಲೂ) ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆ (ಚಿಕ್ಕದಾಗಿ ಎನ್‌ಎಸ್‌ಇ)ಗೆ ಒತ್ತುಕೊಡಲಾಗಿದೆ.

ಎನ್‌ಎಸ್‌ಇನಲ್ಲಿ ಕೆಲವು ಪ್ರಮುಖ ಆಯಾಮಗಳು 1968ರ ಎನ್‌ಪಿಇ ನಂತರದಲ್ಲಿ ರೂಪ ಪಡೆದುಕೊಳ್ಳುತ್ತಿವೆ. ಅವುಗಳನ್ನು ತಿಳಿಯಲು ಪ್ರಯತ್ನಿಸುವುದು ಉಪಯುಕ್ತವಾಗುತ್ತದೆ.

**ಶಿಕ್ಷಣದ ಧ್ಯೇಯೋದ್ದೇಶಗಳು**

ಈ ಆಯಾಮವನ್ನು ಸರಿಯಾಗಿ ತಿಳಿಯಲು ನಾವು ಗಮನಿಸಬೇಕಾದದ್ದು: ಮೊದಲಿಗೆ, ಧ್ಯೇಯೋದ್ದೇಶಗಳ ವಿಷಯವು ಪ್ರಾಯಶಃ ಅತೀ ಹಳೆಯದು ಎನ್ನುವುದು ಆಶ್ಚರ್ಯವನ್ನೇನು ಹುಟ್ಟಿಸುವುದಿಲ್ಲ ಮತ್ತು ಮೊದಲಿಗೆ ಹೇಳಿದ ಇಪ್ಪತ್ತನೇ ಶತಮಾನದ ಆದಿ ಭಾಗದ ಚರ್ಚೆಗಳಲ್ಲಿ ಬಹಳ ಪ್ರಮುಖವಾಗಿ ಕಂಡುಬರುತ್ತದೆ. ಎರಡನೆಯದಾಗಿ, 'ಶಿಕ್ಷಣದ ಸಾಮಾಜಿಕ ಉದ್ದೇಶಗಳು' ಮತ್ತು 'ಶಿಕ್ಷಣದ ಧ್ಯೇಯಗಳು' ಇವುಗಳಲ್ಲಿನ ತಾತ್ವಿಕ ಭಿನ್ನತೆಯನ್ನು ಗುರುತಿಸಬೇಕು.

ಈ ಲೇಖನದಲ್ಲಿ 'ಸಾಮಾಜಿಕ ಉದ್ದೇಶಗಳು' ಎನ್ನುವುದನ್ನು ನಾನು 'ಉದ್ದೇಶಗಳು' ಎಂದೇ ಉಲ್ಲೇಖಿಸುತ್ತೇನೆ. ಆಗ ಶಿಕ್ಷಣದ ಉದ್ದೇಶಗಳು ಎನ್ನುವುದು ಶಿಕ್ಷಣದಿಂದ ಎಂತಹ ಸಮಾಜದ ನಿರ್ಮಾಣವನ್ನು ಇಚ್ಛಿಸುತ್ತೇವೆ ಮತ್ತು ಎಂತಹ ಸಾಮಾಜಿಕ ಬದಲಾವಣೆಗಳನ್ನು ಮಾಡಲು ಬಯಸುತ್ತೇವೆ ಎಂಬುದಕ್ಕೆ ಸಂಬಂಧಿಸಿದುದಾಗಿರುತ್ತದೆ. ಉದಾಹರಣೆಗೆ, ಕೊಠಾರಿ ಆಯೋಗವು ಶಿಕ್ಷಣವು ಸಾಮಾಜಿಕ ಬದಲಾವಣೆಯ ಸಾಧನ ಆಗಬೇಕೆಂದು ಆಶಿಸಿದಾಗ, ಅಥವಾ ರಾಷ್ಟ್ರೀಯ ಶಿಕ್ಷಣ ಮಂಡಳಿ (ಎನ್‌ಸಿಇ) 1968 ಶಿಕ್ಷಣವು "ರಾಷ್ಟ್ರೀಯ ಪ್ರಗತಿಯನ್ನು ಉತ್ತೇಜಿಸುವಲ್ಲಿ, ಸಾಮಾನ್ಯ ಪೌರತ್ವ ಮತ್ತು ಸಂಸ್ಕೃತಿಯ ಪ್ರಜ್ಞೆಯನ್ನು ಸೃಷ್ಟಿಸುವಲ್ಲಿ ಮತ್ತು ರಾಷ್ಟ್ರೀಯ ಏಕೀಕರಣವನ್ನು ಬಲಪಡಿಸುವಲ್ಲಿ ತನ್ನ ಪ್ರಮುಖ ಪಾತ್ರವನ್ನು ವಹಿಸಬೇಕೆಂದು" ಬಯಸಿದಾಗ ಅದು ಶಿಕ್ಷಣದ ಉದ್ದೇಶಗಳ ಬಗ್ಗೆ ಉಲ್ಲೇಖಿಸುತ್ತಿದೆ. ನಾವು ಎಂತಹ ಸಮಾಜ ಬೇಕೆಂದು ಬಯಸುತ್ತೇವೆ ಅದಕ್ಕೆ ಸಂಬಂಧಿಸಿದುದಾಗಿದೆ.

ಮತ್ತೊಂದೆಡೆಯಲ್ಲಿ, ಶಿಕ್ಷಣದ ಧ್ಯೇಯಗಳು ಸಮಾಜದ ಪ್ರತೀ ಸದಸ್ಯನಲ್ಲಿ ಬೆಳೆಸಬೇಕಾದ ಗ್ರಹಿಕೆಯ ರೀತಿ, ಸಾಮರ್ಥ್ಯಗಳು, ಮೌಲ್ಯಗಳು, ಕೌಶಲಗಳು ಮುಂತಾದವುಗಳನ್ನು ನೇರವಾಗಿ ತಿಳಿಸುತ್ತವೆ. ಅದೇ ಹೊತ್ತಿಗೆಯ ಉದಾಹರಣೆ ತೆಗೆದುಕೊಳ್ಳುವುದಾದರೆ (ಎನ್‌ಪಿಇ 1968), ''ಶಿಕ್ಷಣ ವ್ಯವಸ್ಥೆಯು ಚಾರಿತ್ರ್ಯ ಮತ್ತು ಸಾಮರ್ಥ್ಯ ಹೊಂದಿದ ತರುಣ ತರುಣಿಯರನ್ನು ಬೆಳೆಸಬೇಕು. ಅವರು ದೇಶ ಸೇವೆ ಮತ್ತು ದೇಶದ ಪ್ರಗತಿಗೆ ಕಟಿಬದ್ಧರಾಗಿರಬೇಕು'' ಎಂದು ಉಲ್ಲೇಖಿಸುವಾಗ ಅದು ಶಿಕ್ಷಣದ ಧ್ಯೇಯಗಳ ಬಗ್ಗೆ ಹೇಳುತ್ತಿದೆ. ಒಬ್ಬ ವ್ಯಕ್ತಿಯಲ್ಲಿ ಮೇಲೆ ಹೇಳಿದ ಗುಣಗಳನ್ನು ಬೆಳೆಸುವುದು ಶಿಕ್ಷಣದ ಧ್ಯೇಯ ಹಾಗೂ ಶಿಕ್ಷಣದ ಸಾಮಾಜಿಕ ಉದ್ದೇಶವನ್ನು ಪರಿಪೂರ್ಣಗೊಳಿಸುತ್ತದೆ. ಅವು ಬಹಳ ಹತ್ತಿರದ ಸಂಬಂಧವನ್ನು ಹೊಂದಿವೆ ಮತ್ತು ಹೆಚ್ಚು ಒಂದರೊಳಗೊಂದು ಬೆಸಿದಿವೆಯಾದ್ದರಿಂದ ಚರ್ಚೆಯಲ್ಲಿ ಒಂದರಿಂದ ಇನ್ನೊಂದಕ್ಕೆ ವಿಷಯವು ಹರಿಯುತ್ತಿರುತ್ತದೆ.

ಶಿಕ್ಷಣದ ರಾಷ್ಟ್ರೀಯ ಚರ್ಚೆಯಿಂದಾರಬ್ಯ ಕೆಲವು ಉದ್ದೇಶಗಳು ಸ್ಥಿರವಾಗಿಯೇ ಉಳಿದಿವೆ: ರಾಜಕೀಯವಾಗಿ ಸಧೃಡವಾದ, ಸಾಮರಸ್ಯದಿಂದಿರುವ, ಆರ್ಥಿಕವಾಗಿ ಸಮೃದ್ಧವಾದ ಮತ್ತು ಪ್ರಜಾಪ್ರಭುತ್ವವಾದಿ ರಾಷ್ಟ್ರವನ್ನು ಕಟ್ಟುವುದು. ಎನ್‌ಸಿಎಫ್ 2005ರವರೆಗೂ ಇವು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ಎಲ್ಲ ದಾಖಲೆಗಳಲ್ಲೂ ಕಂಡುಬರುತ್ತವೆ. ನಾವು ಸ್ವಾತಂತ್ರ್ಯಕ್ಕೆ ಸಮೀಪ ಬಂದಂತೆ ಪ್ರಜಾಪ್ರಭುತ್ವವು ಮತ್ತೂ ಪ್ರಮುಖ ರಾಷ್ಟ್ರೀಯ ಧ್ಯೇಯವಾಯಿತು ಆದ್ದರಿಂದ ಶಿಕ್ಷಣದ ಉದ್ದೇಶದಲ್ಲೂ ಕೂಡ.

'ಈ ಬಗೆಯ ಸಮಾಜ ಮತ್ತು ರಾಷ್ಟ್ರ ನಮ್ಮ ಆಶಯವಾಗಿದ್ದರೆ, ಅಂತಹ ಸಮಾಜ ಕಟ್ಟಲು ಮತ್ತು ಉಳಿಸಿಕೊಳ್ಳಲು ಪ್ರಜೆಗಳಿಗೆ ಯಾವ ಸಾಮರ್ಥ್ಯಗಳಿರಬೇಕು?' ಎನ್ನುವ ತರ್ಕದಿಂದಾಗಿ ವ್ಯಕ್ತಿಯ ಗುಣಗಳ ಬಗೆಗಿನ ಶಿಕ್ಷಣದ ಧ್ಯೇಯಗಳು ಈ ಉದ್ದೇಶಗಳಿಂದಲೇ ಒಡಮೂಡುತ್ತವೆ. ಇವೆಲ್ಲದರ ಫಲವಾಗಿ ಒಂದು ಶತಮಾನಕ್ಕಿಂತಲೂ ಹೆಚ್ಚು ಸಮಯದಿಂದ ವ್ಯಕ್ತಿಗಳ ಕೆಲವು ಸಾಮರ್ಥ್ಯಗಳು ಶಿಕ್ಷಣದ ಧ್ಯೇಯಗಳಲ್ಲಿ ಅಡಕವಾಗಿವೆ. ಅವುಗಳಲ್ಲಿ ಕೆಲವೆಂದರೆ, ಸ್ವತಂತ್ರವಾಗಿ ಮತ್ತು ಸ್ಪಷ್ಟವಾಗಿ ಯೋಚಿಸುವ ಸಾಮರ್ಥ್ಯ, ಭಾರತೀಯ ಸಂಸ್ಕೃತಿಯಲ್ಲಿ ಬೇರೂರಿರುವುದು, ನ್ಯಾಯ ಮತ್ತು ಸಮತೆಗಳೆಡೆಗೆ ಬದ್ಧತೆ, ಜಾತ್ಯಾತೀತ ದೃಷ್ಟಿಕೋನ ಹೊಂದಿರುವುದು ಮತ್ತು ಆರ್ಥಿಕ ಉತ್ಪಾದಕತೆಗೆ ಕೊಡುಗೆ ನೀಡಬಲ್ಲ ಶಕ್ತಿ – ಇವುಗಳು ಕೆಲವು ಅಂತಹ ಪ್ರಮುಖ ಸಾಮರ್ಥ್ಯಗಳು.

ನಿಜವಾಗಿ ಹೇಳಬೇಕೆಂದರೆ, ಈ ಧ್ಯೇಯ ಮತ್ತು ಉದ್ದೇಶಗಳ ಆಧಾರದಲ್ಲಿಯೇ ಎನ್‌ಎಸ್‌ಇಯ ಅಗತ್ಯವನ್ನು ಸಮರ್ಥಿಸಬಹುದಾಗಿದೆ. ಆದ್ದರಿಂದ ಎನ್‌ಎಸ್‌ಇಯ ಮುಖ್ಯ ಆಯಾಮವೆಂದರೆ ದೇಶದ ಉದ್ದಗಲಕ್ಕೂ ಶಿಕ್ಷಣವನ್ನು ನಿರ್ದೇಶಿಸುವ ಶಿಕ್ಷಣದ ಧ್ಯೇಯ ಮತ್ತು ಉದ್ದೇಶಗಳು. ಎನ್‌ಸಿಎಫ್‌ನ ಅಗತ್ಯವನ್ನೇ ಪ್ರಶ್ನಿಸುವವರು, ಅದನ್ನು ವಿರೋಧಿಸುವವರು ಶಿಕ್ಷಣದ ಧ್ಯೇಯ ಮತ್ತು ಉದ್ದೇಶಗಳನ್ನೇ ಆಗ್ರಹದಿಂದ  ಟೀಕಿಸುತ್ತಾರೆ. ಇವರು ನನ್ನ ಪ್ರಕಾರ ತಪ್ಪುದಾರಿಗೆಳೆಯಲ್ಪಟ್ಟವರು. ಶಿಕ್ಷಣದ ಧ್ಯೇಯಗಳು ಸ್ಪಷ್ಟವಾಗಿ ನಿರುಪಯುಕ್ತವೆಂದೂ ಮತ್ತು ಶಿಕ್ಷಣವನ್ನು ನಿರ್ದೇಶಿಸುವಲ್ಲಿ ಅಶಕ್ತವೆಂದೂ ಮತ್ತು ಶಿಕ್ಷಣದ ಉದ್ದೇಶಗಳು ಆರ್ಥಿಕ ಮತ್ತು ಸಾಮಾಜಿಕ ಆಕಾಂಕ್ಷೆಗಳನ್ವಯ ಪೋಷಕರು ನಿರ್ಧರಿಸಬೇಕೆಂದೂ ಸಾಮಾನ್ಯವಾಗಿ ಘೋಷಿಸಲಾಗುತ್ತದೆ. ಈ ಪುಟ್ಟ ಬರಹದಲ್ಲಿ ಈ ಎಲ್ಲ ವಾದಗಳಿಗೂ ನಾನು ಪ್ರತಿವಾದ ಹೂಡಲಾರೆ. ಆದರೂ, ಚಿಂತನೆಗೆ ಹಚ್ಚಲು ಇಬ್ಬರು ಶಿಕ್ಷಣ ತತ್ವಶಾಸ್ತ್ರಜ್ಞರನ್ನು ಉದಾಹರಿಸುತ್ತೇನೆ. ಶಿಕ್ಷಣದ ಧ್ಯೇಯಗಳು ನಿರುಪಯುಕ್ತವೆಂದು ಹೇಳುವವರು ಇವನ್ನು ಪ್ರಮಾಣವೆಂದೇನೂ ಪರಿಗಣಿಸಬೇಕಿಲ್ಲ.

ಡ್ಯೂಯಿ ತನ್ನ ಪ್ರಸಿದ್ಧ ಪುಸ್ತಕ ಡೆಮಾಕ್ರಸಿ ಅಂಡ್ ಎಜುಕೇಶನ್‌ನಲ್ಲಿ ಹೀಗೆ ಹೇಳುತ್ತಾನೆ: "ಧ್ಯೇಯವಿದ್ದು ಕ್ರಿಯೆಗೆಳಸುವುದೆಂದರೆ ಬುದ್ಧಿವಂತಿಕೆಯಿಂದ ಕೆಲಸ ಮಾಡಿದಂತೆ ಎಂಬುದೇ ಅಂತಿಮ ತೀರ್ಮಾನ. ಒಂದು ಕ್ರಿಯೆಯ ಗಮ್ಯವನ್ನು ಮುಂಗಾಣುವುದೆಂದರೆ, ಸರಂಜಾಮುಗಳು ಮತ್ತು ನಮ್ಮ ಸಾಮರ್ಥ್ಯಗಳನ್ನು ಗಮನಿಸಲು, ಆಯ್ಕೆ ಮಾಡಲು ಮತ್ತು ಹೊಂದಿಸಲು ಒಂದು ಮೂಲಾಧಾರವನ್ನು ಹೊಂದಿರುವುದು ಎಂದೇ. ಇವೆಲ್ಲವನ್ನು ಮಾಡುವುದೆಂದರೆ ಬುದ್ಧಿ ಇರುವುದು (ಕೇವಲ ಅಸ್ಪಷ್ಟ ಆಕಾಂಕ್ಷೆಯಲ್ಲದೆ, ಕ್ರಿಯೆಗೆ ಬುದ್ಧಿ ಬೇಕಾಗಿದ್ದರೆ ) ಸಂಪನ್ಮೂಲಗಳು ಹಾಗೂ ಸವಾಲುಗಳನ್ನು ಪರಿಗಣನೆಗೆ ತೆಗೆದುಕೊಂಡಿರುವ ಯೋಜನೆ ಇರುವುದು. ಸದ್ಯದ ಪರಿಸ್ಥಿತಿಯನ್ನು ಭವಿಷ್ಯದ ಫಲಿತಗಳಿಗೆ ಮತ್ತು ಭವಿಷ್ಯದ ಫಲಿತಗಳನ್ನು ಸದ್ಯದ ಪರಿಸ್ಥಿತಿಗೆ ಸಮೀಕರಿಸುವ ಸಾಮರ್ಥ್ಯವೇ ಬುದ್ಧಿ. **ಧ್ಯೇಯ ಅಥವಾ ಉದ್ದೇಶ ಹೊಂದಿರುವುದರ ಅರ್ಥವೆಂದರೆ ಈ ಗುಣಗಳೇ. ಬುದ್ಧಿ ಕಡಿಮೆ ಇರುವುದು —— ಓರ್ವ ತಾನು ಏನು ಮಾಡಲು ಹೊರಟಿದ್ದೇನೆಂಬುದನ್ನು ಅಂದರೆ ತನ್ನ ಕ್ರಿಯೆಯ ಫಲಶೃತಿಯನ್ನು ಅರಿತಿಲ್ಲದಿರುವ ಮಟ್ಟದಲ್ಲೇ ಮೂರ್ಖ ಅಥವಾ ಅಂಧ ಅಥವಾ ಅಜ್ಞ.** "[5] (ಪು120-121, ಒತ್ತು ಸೇರಿಸಲಾಗಿದೆ)

ಪ್ರೊಫೆಸರ್ ಕ್ರಿಸ್ಟೋಫರ್ ವಿಂಚ್ ಶಿಕ್ಷಣದ ಧ್ಯೇಯಗಳನ್ನು ಚರ್ಚಿಸುವಾಗ ಹೇಳುತ್ತಾನೆ "ಶಿಕ್ಷಣದ ಅತಿ ಮುಖ್ಯ ಧ್ಯೇಯಗಳು ಸ್ಪಷ್ಟವಾಗಿ ಒಪ್ಪಿತವಾಗಿಲ್ಲದಿದ್ದರೆ, ಗುಪ್ತ ಧ್ಯೇಯಗಳೇ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ನಿರ್ವಹಣೆಯನ್ನು ನಿರ್ಧರಿಸುವ ಹೆಚ್ಚು ಪ್ರಬಲ ಧ್ಯೇಯಗಳಾಗಿಬಿಡುತ್ತವೆ. ಈ ಧ್ಯೇಯಗಳು ಪ್ರಾಯಶಃ ವ್ಯವಸ್ಥೆಯ ಹೊರಗಿನ ಮತ್ತು ಒಳಗಿನ ಬಹಳ ಪ್ರಭಾವೀ ಗುಂಪುಗಳಿಂದಲೇ ನಿರ್ಧರಿಸಲ್ಪಟ್ಟಿರುತ್ತವೆ. **ಧ್ಯೇಯಗಳ ಬಗ್ಗೆ ಸಾರ್ವಜನಿಕ ಚರ್ಚೆಯು ಆಗುವುದೇ ಇಲ್ಲ ಅಥವಾ ಅತೀ ಕಡಿಮೆ ಆಗಿರುತ್ತದೆಯಾದ್ದರಿಂದ ಕೆಲವರ ಹಿತಾಸಕ್ತಿಗಳನ್ನು ಪರಿಗಣಿಸುವುದೇ ಇಲ್ಲ ಅಥವಾ ಧಕ್ಕೆಯೇ ಆಗಬಹುದು.** ಒಂದು ಸಮಾಜ ತನ್ನ ಶಿಕ್ಷಣ ವ್ಯವಸ್ಥೆಗೆ ಸ್ಪಷ್ಟ ಮತ್ತು ಒಪ್ಪಿತ ಧ್ಯೇಯಗಳನ್ನು ಹೊಂದಿಲ್ಲವಾದರೆ, ಎಲ್ಲರೂ ಗೌರವಿಸುವ ಮತ್ತು ಸುಲಲಿತವಾಗಿ ಕಾರ್ಯನಿರ್ವಹಿಸುವ ಆರೋಗ್ಯವಂತ ವ್ಯವಸ್ಥೆಯನ್ನು ಹೊಂದಲು ವಿಫಲವಾಗುವುದಷ್ಟೇ ಅಲ್ಲ, ಯಾವ ಗುಂಪುಗಳ ಹಿತಾಸಕ್ತಿಗಳನ್ನು ಸರಿಯಾಗಿ ಗಮನಿಸಿಲ್ಲವೋ ಅಂತಹಾ ಗುಂಪುಗಳಲ್ಲಿ ವಿಸ್ತಾರವಾಗಿ ಹಬ್ಬಿದ ಮತು ಅಪಾಯಕಾರಿಯಾದ ಅಸಮಾಧಾನ ಮನೆಮಾಡುತ್ತದೆ."[6] (ಪು 33, ಒತ್ತು ಸೇರಿಸಲಾಗಿದೆ).

**ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯ ಸ್ವರೂಪ**

ದೇಶದುದ್ದಗಲಕ್ಕೂ ಒಂದೇ ಬಗೆಯ ಶಿಕ್ಷಣವನ್ನು ಕೊಠಾರಿ ಆಯೋಗದ ವರದಿಯಲ್ಲೇ ಮೊದಲ ಬಾರಿಗೆ ಸೂಚಿಸಿದಂತೆ ತೋರುತ್ತದೆ. ಅದರ ಆಧಾರದ ಮೇಲೆ ಎನ್‌ಪಿಇ 1986ರಲ್ಲಿ "ದೇಶದ ಎಲ್ಲ ಭಾಗದಲ್ಲೂ ಸಾಧ್ಯವಾದಷ್ಟೂ ಒಂದೇ ಬಗೆಯ ಶಿಕ್ಷಣ ಸ್ವರೂಪವನ್ನು ಹೊಂದಿರುವುದು ಅನುಕೂಲಕರ. ಅಂತಿಮ ಗುರಿಯು 10+2+3 ಮಾದರಿಯನ್ನು ಎಲ್ಲೆಡೆಯೂ ಅನುಸರಿಸುವುದು. ಎರಡು ವರ್ಷದ

[5] ಜಾನ್ ಡ್ಯೂಯಿ, ಡೆಮಾಕ್ರಸಿ ಅಂಡ್ ಎಜುಕೇಷನ್, ಮ್ಯಾಕ್ಮಿಲ್ಲನ್ ಕಂಪೆನಿ, ನ್ಯೂ ಯಾರ್ಕ್, 1916

[6] ಕ್ರಿಸ್ಟೋಫರ್ ವಿಂಚ್, ಕ್ವಾಲಿಟಿ ಆಫ್ ಎಜುಕೇಷನ್, ಜರ್ನಲ್ ಆಫ್ ಫಿಲಾಸಫಿ ಆಫ್ ಎಜುಕೇಷನ್, ಸಂಪುಟ 30, ಸಂ 1, 1996

ಹಿರಿಯ ಪ್ರೌಢಶಾಲೆಯ ಶಾಲೆಯಲ್ಲಿ, ಕಾಲೇಜಿನಲ್ಲಿ ಇಲ್ಲವೇ ಎರಡೂ ಕಡೆಯೂ ಸ್ಥಳೀಯ ಅನುಕೂಲಕ್ಕೆ ತಕ್ಕಂತೆ ಇರಬಹುದು''[7] (ಪು. 44) ಎಂದು ಶಿಫಾರಸು ಮಾಡಿದೆ.

ಸಲಹಾತ್ಮಕವಾಗಿರುವ ಈ ಶಿಫಾರಸನ್ನು ನೋಡಿದರೆ, ಇದು ರಾಜ್ಯ ವಿಷಯಕ್ಕೆ ಸಂಬಂಧಿಸಿದ್ದೆಂದು ಭಾಸವಾಗುತ್ತದೆ. ಎನ್‌ಪಿಇ 86 ಸ್ವರೂಪದ ವಿಷಯದಲ್ಲಿ ಸಂಧಿಗ್ಧತೆಯನ್ನೇನೂ ಹೊಂದಿಲ್ಲ ಮತ್ತು ಮುಂದುವರೆದು ಪ್ರಾಥಮಿಕ ಶಿಕ್ಷಣವನ್ನು 5+3 ಎಂದು ವಿಭಾಗಿಸುತ್ತದೆ ಹಾಗೂ ದೇಶದೆಲ್ಲೆಡೆ +2 ಶಾಲಾಶಿಕ್ಷಣವೆಂದೇ ಒಪ್ಪಿಕೊಳ್ಳಬೇಕೆಂದು ಬಯಸುತ್ತದೆ (ಪು 5).

ಎಲ್ಲ ಎನ್‌ಸಿಎಫ್‌ಗಳೂ (1975ರ ಹತ್ತು ವರ್ಷದ ಶಾಲಾಶಿಕ್ಷಣಕ್ಕೆ ಪಠ್ಯಕ್ರಮವನ್ನೂ ಒಳಗೊಂಡು) ಎನ್‌ಎಸ್‌ಇಗೆ ಒಂದು ಸಾಮಾನ್ಯ ಸ್ವರೂಪ ಇರಬೇಕೆಂಬುದರ ಬಗ್ಗೆ ಒತ್ತು ನೀಡುತ್ತವೆ. ಅಷ್ಟೇ ಅಲ್ಲ ಎನ್‌ಸಿಎಫ್‌ನ ಬಲು ಮುಖ್ಯ ಗುರಿಯೆಂದೂ ಈ ದಾಖಲೆಗಳು ಹೇಳುತ್ತವೆ.

## ಎನ್‌ಎಸ್‌ಇ ಮತ್ತು ಭಾಷಾ ನೀತಿ

ಎನ್‌ಎಸ್‌ಇಯ ಮತ್ತೊಂದು ಬಲು ಮುಖ್ಯ ಆಯಾಮವೆಂದರೆ ಭಾಷೆಗಳ ಬೆಳವಣಿಗೆಗೆ ಕೊಟ್ಟಿರುವ ಪ್ರಾಧಾನ್ಯತೆ. ಭಾರತೀಯ ಭಾಷೆಗಳ ಬೆಳವಣಿಗೆಯ ಪ್ರಾಮುಖ್ಯತೆಯನ್ನು ಎನ್‌ಪಿಇ 68 ಗುರುತಿಸುತ್ತಾ ತಳೆಯುವ ನಿರ್ಧಾರವೆಂದರೆ ''ಜನರ ರಚನಾತ್ಮಕ ಚೈತನ್ಯಗಳು ಹೊರಬರುವುದಿಲ್ಲ, ಶಿಕ್ಷಣದ ಗುಣಮಟ್ಟ ಹೆಚ್ಚುವುದಿಲ್ಲ, ಜನರಲ್ಲಿ ಜ್ಞಾನ ಪ್ರಸಾರವಾಗುವುದಿಲ್ಲ ಹಾಗೂ ಜ್ಞಾನಶಾಖೆಗಳು ಮತ್ತು ಜನಸಾಮನ್ಯರ ನಡುವಿನ ಕಂದರ ಹೆಚ್ಚಾಗದಿದ್ದರೂ ಹೀಗೇ ಉಳಿಯುತ್ತದೆ'' (ಪು 39). ಸೂಚಿಸಿರುವ ತ್ರಿಭಾಷಾ ಸೂತ್ರವು ಪ್ರಾದೇಶಿಕ ಭಾಷೆಗಳ ಬೆಳವಣಿಗೆ, ಸಂಪರ್ಕ ಭಾಷೆಯ ಬೆಳವಣಿಗೆ ಮತ್ತು ಇಂಗ್ಲೀಷಿನ ಜ್ಞಾನ ಇವೆಲ್ಲದರ ಮಧ್ಯೆ ಸಮತೋಲನ ತರುವ ಪ್ರಯತ್ನವೆಂದು ತೋರುತ್ತದೆ.

ಸರ್ಕಾರಗಳು ಮತ್ತು ಶಾಲೆಗಳು ಆಶಯ ಮರೆತು ಕೇವಲ ಇದನ್ನು ಕಾಟಾಚಾರಕ್ಕಾಗಿ ಅನುಷ್ಠಾನ ಮಾಡಿದರೂ ಸಹ, ಇದು ಶಿಕ್ಷಣದಲ್ಲಿ ಒಪ್ಪಿತವಾದ ಭಾಷಾ ನೀತಿಯಾಗಿದ್ದು ಎನ್‌ಪಿಇ 68'ರ ನಂತರದ ಎಲ್ಲ ನೀತಿಗಳೂ ಹಾಗೂ ಎನ್‌ಸಿಎಫ್ ಕೂಡ ಇದನ್ನು ಪುನರುಚ್ಚರಿಸಿವೆ.

## ಸಮಾನ ಅಧ್ಯಯನ ಯೋಜನೆ

ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯು ಶಾಲಾ ಮಟ್ಟದಲ್ಲಿ ಸಮಾನ ಅಧ್ಯಯನ ಯೋಜನೆಯನ್ನು ಪರಿಭಾವಿಸುತ್ತದೆ. ಪ್ರಾಥಮಿಕ ಮತ್ತು ಪ್ರೌಢ

ಶಿಕ್ಷಣಕ್ಕೆ ರಾಷ್ಟ್ರೀಯ ಪಠ್ಯಕ್ರಮ —— 1988ರ ಪಠ್ಯಕ್ರಮವು (ಸಂಕ್ಷಿಪ್ತವಾಗಿ ಎನ್‌ಸಿಎಫ್ 1988) ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ ಸಮಾನ ಅಧ್ಯಯನ ಯೋಜನೆಯನ್ನು ಪ್ರತಿಪಾದಿಸುತ್ತದೆ. ಪ್ರಾಥಮಿಕ ಮಟ್ಟದಲ್ಲಿ ಅದು ಸೂಚಿಸುವುದು ಒಂದು ಭಾಷೆ (ಮಾತೃ ಭಾಷೆ/ ಪ್ರಾದೇಶಿಕ ಭಾಷೆ), ಗಣಿತ, ಪರಿಸರ ವಿಜ್ಞಾನ, ಕೆಲಸದ ಅನುಭವ, ಕಲೆ ಹಾಗೂ ಆರೋಗ್ಯ ಮತ್ತು ದೈಹಿಕ ಶಿಕ್ಷಣ ಈ ವಿಷಯಗಳನ್ನು. ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಯ ಮಟ್ಟದಲ್ಲಿ ಮಕ್ಕಳು ಮೂರು ಭಾಷೆಗಳನ್ನು ಓದಬೇಕು ಮತ್ತು ಪರಿಸರ ವಿಜ್ಞಾನದ ಬದಲಾಗಿ ವಿಜ್ಞಾನ ಮತ್ತು ಸಮಾಜ ಅಧ್ಯಯನ, ಉಳಿದ ವಿಷಯಗಳೂ ಹಾಗೇ ಮುಂದುವರೆಯುತ್ತವೆ. ಎನ್‌ಸಿಎಫ್ 2000 ಮತ್ತು ಎನ್‌ಸಿಎಫ್ 2005ರಲ್ಲಿ ಇದು ಪ್ರದಿಪಾದಿಸಿಲ್ಲವಾದರೂ ದೇಶಾದ್ಯಂತ ಈ ಯೋಜನೆಯೇ ಸರ್ವೇಸಾಮಾನ್ಯವಾಗಿದೆ. ಸಮಾನ ಅಧ್ಯಯನ ಯೋಜನೆ ಅಂದರೆ ಪ್ರತಿ ವಿಷಯದಲ್ಲೂ ದೇಶಾದ್ಯಂತ ಒಂದೇ ಪಠ್ಯಕ್ರಮ ಇರಬೇಕೆಂದೇನೂ ಅಲ್ಲ. ಸ್ಥಳೀಯ ಸಂದರ್ಭಕ್ಕೆ ಪಠ್ಯವನ್ನು ಒಗ್ಗಿಸಲು ಸಾಕಷ್ಟು ಅವಕಾಶಗಳನ್ನೂ ಕಲ್ಪಿಸಿಕೊಟ್ಟಿದೆ. ಆದಾಗ್ಯೂ ಸಮಾನ ಮಟ್ಟಕ್ಕಾಗಿ ವಿಷಯಗಳ ಸ್ವರೂಪದಲ್ಲಿ ಸಾಕಷ್ಟು ಸಾಮ್ಯತೆ ಇರಬೇಕು. ಸಮಾನ ಅಧ್ಯಯನ ಯೋಜನೆಯು ದೇಶಾದ್ಯಂತ ಸಮಾನ ಮಟ್ಟದ ಸಾಧನೆಗೆ ಅವಕಾಶಗಳನ್ನು ನೀಡಿದೆ.

## ಸಮಾನ ಮುಖ್ಯ ಪಠ್ಯಕ್ರಮ

ಎನ್‌ಪಿಇ 86ರ ಪ್ರಕಾರ ''ಎಲ್ಲರಿಗೂ ಒಂದು ಸಮಾನವಾದ ಮುಖ್ಯ ಪಠ್ಯಕ್ರಮವನ್ನು ಹೊಂದಿದ್ದು ಉಳಿದ ವಿಷಯಗಳೆಡೆಗೆ ಸಾಕಷ್ಟು ಸ್ವಾತಂತ್ರ್ಯವನ್ನು ನೀಡುವ ರಾಷ್ಟ್ರೀಯ ಪಠ್ಯದ ಚೌಕಟ್ಟಿನ ಆಧಾರದ ಮೇಲೆ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯು ಇರುತ್ತದೆ. ಸಮಾನ ಮುಖ್ಯ ಪಠ್ಯವು ಭಾರತದ ಸ್ವಾತಂತ್ರ್ಯ ಆಂದೋಲನದ ಚರಿತ್ರೆ, ಸಾಂವಿಧಾನಿಕ ಬಾಧ್ಯತೆಗಳು ಮತ್ತಿತರ ರಾಷ್ಟ್ರೀಯ ಭಾವನೆಗೆ ಅಗತ್ಯವಾದ ವಿಷಯಗಳನ್ನು ಹೊಂದಿರಬೇಕು. ಈ ಮೂಲಾಂಶಗಳು ಎಲ್ಲ ವಿಯಷಗಳ ಪಠ್ಯಗಳಲ್ಲೂ ಅಡಕವಾಗಿದ್ದು ಭಾರತೀಯ ಸಮಾನ ಸಾಂಸ್ಕೃತಿಕ ಪರಂಪರೆ, ಸಮಾನತೆ, ಪ್ರಜಾಪ್ರಭುತ್ವ ಮತ್ತು ಜಾತ್ಯಾತೀತತೆ, ಲಿಂಗ ಸಮಾನತೆ, ಪರಿಸರ ರಕ್ಷಣೆ, ಸಮಾಜಿಕ ಅಡೆತಡೆಗಳ ತೆರವು, ಕುಟುಂಬ

[7] ರಾಷ್ಟ್ರೀಯ ಶಿಕ್ಷಣ ನೀತಿ, ಮಾನವ ಸಂಪನ್ಮೂಲಾಭಿವೃದ್ಧಿ ಸಚಿವಾಲಯ, ಹೊಸ ದಿಲ್ಲಿ, 1998

ಯೋಜನೆಯನ್ನು ಪಾಲಿಸುವುದು ಮತ್ತು ವೈಜ್ಞಾನಿಕ ಮನೋಭಾವವನ್ನು ಅಚ್ಚೊತ್ತುವುದು ಮುಂತಾದುವನ್ನು ಬೆಳೆಸಲು ಸಹಕಾರಿಯಾಗಬೇಕು. ಎಲ್ಲ ಶೈಕ್ಷಣಿಕ ಕಾರ್ಯಕ್ರಮಗಳೂ ಜಾತ್ಯತೀತ ಮೌಲ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.'' (ಪು 5)

ಎಲ್ಲ ಭಾರತೀಯ ಮಕ್ಕಳೂ ಏನನ್ನು ಕಲಿತಿರಲೇಬೇಕು ಎನ್ನುವುದನ್ನು ಇದು ಸ್ಪಷ್ಟಪಡಿಸುತ್ತದೆ. ಜೊತೆಗೆ ಪಠ್ಯವನ್ನು ಸಾಂದರ್ಭಿಕಗೊಳಿಸಲು ಅಗತ್ಯ ಸ್ವಾತಂತ್ರ್ಯವನ್ನೂ ನೀಡುತ್ತದೆ.

ಇಲ್ಲಿಯವರೆಗಿನ ಚರ್ಚೆಯ ಸಾರಾಂಶವೆಂದರೆ:

- ಆಧುನಿಕ ಭಾರತದ ನಿರ್ಮಾತೃಗಳು ಭಾರತವು ಎಲ್ಲರಿಗೂ ಸಮಾನ ಹಕ್ಕುಗಳಿರುವ ಪ್ರಜಾಪ್ರಭುತ್ವ ರಾಷ್ಟ್ರವಾಗಬೇಕೆಂಬ ನಿರ್ಧಾರಕ್ಕೆ ಬಂದರು. ಈ ನಿರ್ಧಾರವನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಬಹಳವೇ ಕಠಿಣ ಪರಿಸ್ಥಿತಿಗಳನ್ನು ಹಾದುಬಂದು ತೆಗೆದುಕೊಳ್ಳಲಾಯಿತು.
- ಭಾರತವಾದರೋ ವೈವಿಧ್ಯತೆಯಿಂದ ಕೂಡಿದ ದೇಶ. ಸಮಾನತೆ ಮತ್ತು ರಾಷ್ಟ್ರೀಯತೆಗಳ ಚಿಂತನೆಗಳನ್ನು ಎಲ್ಲರೂ ಒಂದೇ ಬಗೆಯಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲ ಹಾಗೂ ಅದೇ ಬದ್ಧತೆಯಿಂದ ಅವನ್ನು ಒಪ್ಪಿಕೊಳ್ಳಲೂ ಇಲ್ಲ.
- ಇದರೊಟ್ಟಿಗೆ ಎಲ್ಲರ ಗೌರವಯುತ ಬದುಕಿಗಾಗಿ ದೇಶದ ಆರ್ಥಿಕ ಬೆಳವಣಿಗೆ ತುರ್ತು ಅಗತ್ಯವಾಗಿದ್ದಿತು (ಈಗಲೂ ಇದೆ).
- ಆದ್ದರಿಂದ ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಜನರ ಸಾಮರ್ಥ್ಯವನ್ನು ಬೆಳೆಸುವುದು ಮತ್ತು ಪ್ರಜಾಪ್ರಭುತ್ವ ಮೌಲ್ಯಗಳಿಂದೊಡಗೂಂಡ ರಾಷ್ಟ್ರೀಯತೆ ಭಾವನೆಯನ್ನು ಬೆಳೆಸುವುದು ಅನಿವಾರ್ಯವಾಗಿತ್ತು. ಅಗತ್ಯವಾದ ಸಾಮರ್ಥ್ಯಗಳು, ಮೌಲ್ಯಗಳು, ಜ್ಞಾನ ಮತ್ತು ಕೌಶಲಗಳನ್ನು ಬೆಳೆಸಲು ಇರುವ ಒಂದೇ ದಾರಿಯೆಂದರೆ ಶಿಕ್ಷಣ.
- ಒಂದು ದೇಶವಾಗಿ ನೋಡುವಾಗ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಜನರು ಹೋಗುವ ಅವಕಾಶ ಖಾತರಿಯಾಗಬೇಕಿತ್ತು, ಅವಕಾಶಗಳ ಸಮಾನತೆ ಖಾತರಿಯಾಗಬೇಕಿತ್ತು, ಶಿಕ್ಷಣ ವ್ಯವಸ್ಥೆಯಲ್ಲಿ ಸಾಮಾನ್ಯ ಅಂಶಗಳಿರಬೇಕಿತ್ತು. ಹಾಗಾಗಿಯೇ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯು ಅಗತ್ಯವಾಯಿತು.
- ನಮಗಿಂದು ಕಾಣುವಂತೆ ಎನ್‌ಎಸ್‌ಇಯ ಗುಣಲಕ್ಷಣಗಳು: ಶಿಕ್ಷಣದ ಸಾಮಾನ್ಯ ಉದ್ದೇಶ ಮತ್ತು ಧ್ಯೇಯಗಳು, ಶಾಲಾ ಶಿಕ್ಷಣದ ರಚನೆ, ಮುಖ್ಯ ವಿಷಯಗಳು ಮತ್ತು ಅಧ್ಯಯನ ಯೋಜನೆಗಳು.
- ಇದಿಲ್ಲದೇ ಎಲ್ಲರಿಗೂ ಸಮಾನ ಶಿಕ್ಷಣ ಅವಕಾಶವನ್ನು ದೃಢಪಡಿಸುವುದು ಅಸಾಧ್ಯ.

ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟು

ಪ್ರಜಾಪ್ರಭುತ್ವವಾದೀ ಸಂವಿಧಾನ ಮತ್ತು ರಾಜಕೀಯ ವ್ಯವಸ್ಥೆ ಇರುವುದರಿಂದ ಸಾಮಾನ್ಯ ಶಿಕ್ಷಣ ವ್ಯವಸ್ಥೆಯು ಅಗತ್ಯವಾಯಿತು. ಇದನ್ನು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ವಿಷದ ಪಡಿಸಲಾಗಿದೆ ಹಾಗೂ ಸಮರ್ಥಿಸಿಕೊಳ್ಳಲಾಗಿದೆ. ಎನ್‌ಎಸ್‌ಇನ ಚಿಂತನೆಗಳನ್ನು ಸಾದೃಶಗೊಳಿಸಿಕೊಳ್ಳುವ ಮಾರ್ಗವೇ ಎನ್‌ಸಿಎಫ್ ಎನ್ನಬಹುದು. ಆದ್ದರಿಂದಲೇ ಎನ್‌ಸಿಎಫ್ ಭಾರತೀಯ ಸಂವಿಧಾನ ಮತ್ತು ಎನ್‌ಪಿಇಗಳಿಂದ ಸಮರ್ಥನೆ ಪಡೆಯುವ ಶಿಕ್ಷಣದ ಯೋಜನೆಯಾಗಿದೆ. ಈ ಮೂಲ ಆಶಯಗಳನುಸಾರ ತರಗತಿಗಳಲ್ಲಿನ ಪಾಠವನ್ನು ನಿರ್ದೇಶಿಸುವ ತತ್ವಗಳ ಒಂದು ಚೌಕಟ್ಟನ್ನು ಕಟ್ಟಿಕೊಡುವುದು ಇದರ ಕೆಲಸವಷ್ಟೇ.

ರಾಷ್ಟ್ರೀಯ ಶಿಕ್ಷಣ ಆಶಯಗಳು ಮತ್ತು ಈ ಆಶಯಗಳನ್ನು ನನಸು ಮಾಡಲು ಅಗತ್ಯವಾದ ತರಗತಿಯಲ್ಲಿನ ಕೆಲಸಗಳನ್ನು ಜೋಡಿಸುವ ದಾರಿಯೇ ಎನ್‌ಸಿಎಫ್, ಆದ್ದರಿಂದ ಪಠ್ಯಸೂಚಿ, ಪಠ್ಯಪುಸ್ತಕ, ಶಿಕ್ಷಣ ಪದ್ಧತಿ ಮತ್ತು ಕಲಿಕಾ ಮಾಪನ ಇವುಗಳೆಲ್ಲವನ್ನು ಅಭಿವೃದ್ಧಿಪಡಿಸಲು ಅಗತ್ಯವಾದ ಮಾರ್ಗದರ್ಶನ ಎಲ್ಲವೂ ಎನ್‌ಸಿಎಫ್ ದಾಖಲೆಯಲ್ಲಿ ಅಡಕವಾಗಿರಬೇಕು. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ, ಇದು ನಾವು ಈಗ ಎಲ್ಲಿದ್ದೇವೆ ಮತ್ತು ರಾಷ್ಟ್ರೀಯ ಶಿಕ್ಷಣ ಆಶಯಗಳು ಎಲ್ಲಿವೆ ಇವೆರಡರುಗಳ ನಡುವಿನ ಮಾರ್ಗನಕ್ಷೆ. ಸ್ಪಷ್ಟ ದಾರಿಯನ್ನೂ ತೋರುತ್ತಾ ಹಾಗೂ ತಕ್ಕ ನಮ್ಯತೆಯನ್ನೂ ನೀಡುತ್ತಾ ಇಂತಹ ಒಂದು ತತ್ವಗಳ ಚೌಕಟ್ಟನ್ನು ಹೊರತರುವುದು ಬಹಳ ಕಠಿಣವಾದರೂ ಎನ್‌ಎಸ್‌ಇ ಅನ್ನು ಪರಿಭಾವಿಸಿದ ಪಥದಲ್ಲಿಡಲು ಅತ್ಯಗತ್ಯ. ದೇಶದ ಸಾಮಾಜಿಕ-ರಾಜಕೀಯ ತತ್ವಗಳು, ಆಶಿಸಿದ ಸಮಾಜ ಮತ್ತು ಅದರಲ್ಲಿನ ಜನರು, ಶಿಕ್ಷಣದ ಶಾಸ್ತ್ರೀಯ ತತ್ವಗಳು ಮತ್ತು ಪ್ರಸ್ತುತ ಸನ್ನಿವೇಶಗಳು ಮತ್ತು ದೇಶದ ಸದ್ಯದ ಅಗತ್ಯಗಳು ಇವೆಲ್ಲವೂ ಅಂತಹ ತತ್ವಗಳ ಚೌಕಟ್ಟಿಗೆ ಕೊಡುಗೆ ನೀಡಬೇಕು.

ಆದ್ದರಿಂದ ಒಬ್ಬ ನಾವಿಕನಿಗೆ ಮಾರ್ಗನಕ್ಷೆ ಹೇಗೆಯೋ ಹಾಗೆ ಶಾಲಾ ವ್ಯವಸ್ಥೆಗೆ ಎನ್‌ಸಿಎಫ್ ಕೂಡ. ನಕ್ಷೆ ಇಲ್ಲದೇ ಹೇಗೆ ನಾವಿಕನು ದಾರಿತಪ್ಪಿಸಿಕೊಳ್ಳುವನೋ ಹಾಗೆಯೇ ರಾಷ್ಟ್ರೀಯ ಆಶಯಗಳ ಅನುಷ್ಠಾನಕ್ಕೆ ತಾನು ಸಹಕಾರಿಯಾಗಿದ್ದೇನೆಯೋ ಇಲ್ಲವೇ ತಡೆಯಾಗಿದ್ದೇನೆಯೋ ಎನ್ನುವುದು ಎನ್‌ಸಿಎಫ್ ಇಲ್ಲದೇ ಶಾಲಾ ಶಿಕ್ಷಣ ವ್ಯವಸ್ಥೆಯು ತಿಳಿಯುವುದಿಲ್ಲ.